

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 1116 (1373)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು

ವಿಷಯ : ಆನ್‌ಲೈನ್‌ನಲ್ಲಿ ಆಹಾರ ಪದಾರ್ಥಗಳ ಖರೀದಿಯ ಕುರಿತು

(ಅ) ರಾಜ್ಯದಲ್ಲಿ ಆಹಾರ ಪದಾರ್ಥಗಳನ್ನು ಆನ್‌ಲೈನ್‌ನಲ್ಲಿ ಮಾರಾಟ ಮಾಡಲು ನಿಗದಿ ಪಡಿಸಿರುವ ಮಾರ್ಗಸೂಚಿಗಳಾವುವು; ಆಹಾರ ಪದಾರ್ಥಗಳ ಗುಣ ನಿಯಂತ್ರಣಕ್ಕಾಗಿ ಸರಕಾರದಿಂದ ಕೈಗೊಳ್ಳಲಾದ ಕ್ರಮಗಳು ಯಾವುವು; (ಮಾರ್ಗಸೂಚಿಯ ಪ್ರತಿಯನ್ನು ಒದಗಿಸುವುದು)

(ಆ) ಗ್ರಾಹಕರು ಆನ್‌ಲೈನ್‌ನಲ್ಲಿ ಖರೀದಿಸಿದ ಆಹಾರ ಪದಾರ್ಥಗಳ ಗುಣಮಟ್ಟದ ಕುರಿತು ಕುಂದುಕೊರತೆಯನ್ನು ದಾಖಲಿಸಬೇಕಾದ ಪ್ರಾಧಿಕಾರ ಯಾವುದು; (ಪ್ರಾಧಿಕಾರದ ವಿಳಾಸ ಮತ್ತು ಸಂಪರ್ಕ ಸಂಖ್ಯೆಯನ್ನು ಒದಗಿಸುವುದು)

(ಇ) ಕಳೆದ ಮೂರು ವರ್ಷಗಳಲ್ಲಿ ಈ ಕುರಿತು ಗ್ರಾಹಕರಿಂದ ದಾಖಲಾದ ಪ್ರಕರಣಗಳು ಎಷ್ಟು; ದೋಷಾರೋಪಣೆ ಸಾಬೀತಾದ ಮತ್ತು ಸಾಬೀತಾಗದ ಪ್ರಕರಣಗಳ ಸಂಖ್ಯೆ ಎಷ್ಟು; ಇಲಾಖೆಯಿಂದ ಪತ್ತೆಹಚ್ಚಲಾದ ಪ್ರಕರಣಗಳ ಸಂಖ್ಯೆ ಎಷ್ಟು? (ಜಿಲ್ಲಾವಾರು ಮಾಹಿತಿಯನ್ನು ಒದಗಿಸುವುದು)